## ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | **549(742)** |
| ಮಾನ್ಯ ಸದಸ್ಯರ ಹೆಸರು | ಶ್ರೀ ಅರವಿಂದ ಕುಮಾರ್ ಅರಳಿ(ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 17.09.2021 |
| ಉತ್ತರಿಸುವ ಸಚಿವರು | ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | 2020-21 ನೇ ಸಾಲಿಗಾಗಿ ವಸತಿ ನಿಲಯಗಳಿಗೆ ಆಹಾರ ಸಾಮಾಗ್ರಿ ಸರಬರಾಜು ಮಾಡಲು ಟೆಂಡರ್ ಕರೆದಿದ್ದು, ಈ ಟೆಂಡರ್‌ನಲ್ಲಿ ಅವ್ಯವಹಾರವಾಗಿದ್ದು, ಸರ್ಕಾರದ ಗಮನಕ್ಕೆ ಬಂದಿದೆಯೇ; | ಬೀದರ್ ಜಿಲ್ಲೆಯ ವಿದ್ಯಾರ್ಥಿನಿಲಯಗಳಿಗೆ 2020-21 ಸಾಲಿಗೆ ಆಹಾರ ಸಾಮಗ್ರಿ ಸರಬರಾಜಿಗಾಗಿ ಟೆಂಡರ್ ಕರೆದು, ಟೆಂಡರ್ ಪರಿಶೀಲನಾ ಸಮಿತಿ ಸಭೆಯ ತೀರ್ಮಾನದಂತೆ, 2020-21ನೇ ಸಾಲಿಗೆ ಜಿಲ್ಲೆಯ ಎಲ್ಲಾ ತಾಲ್ಲೂಕುಗಳ ವಿದ್ಯಾರ್ಥಿನಿಲಯಗಳಿಗೆ ಆಹಾರ ಧಾನ್ಯ ಮತ್ತು ಇತರೆ ಸಾಮಗ್ರಿಗಳನ್ನು ಸರಬರಾಜು ಮಾಡಲು ದಿನಾಂಕ 22.4.2020ರಲ್ಲಿ ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಮಟ್ಟದ ಆಹಾರ ಧಾನ್ಯ ಖರೀದಿ ಸಮಿತಿ ಅಧ್ಯಕ್ಷರು, ಬೀದರ್ ಜಿಲ್ಲೆ ಇವರು ಸರಬರಾಜು ಆದೇಶ ನೀಡಲಾಗಿರುತ್ತದೆ.<br><br>ಸದರಿ ಟೆಂಡರ್ ನ ಕಾರ್ಯಾದೇಶದ ವಿರುದ್ಧ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ಬೆಂಗಳೂರು ಇವರಿಗೆ ಮೇಲ್ಮನವಿಯನ್ನು ಸಲ್ಲಿಸಿದ್ದು, ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ರವರು ಸದರಿ ಮೇಲ್ಮನವಿಯ ವಿಚಾರಣೆ ನಡೆಸಿ, ಜಿಲ್ಲಾ ಸಮಿತಿಯು ಟೆಂಡರ್ ಡಾಕ್ಯುಮೆಂಟ್‌ನ ಷರತ್ತುಗಳನ್ನು ಉಲ್ಲಂಘಿಸಿರುವುದರಿಂದ, ಜಿಲ್ಲಾಧಿಕಾರಿಗಳು, ಬೀದರ್ ಜಿಲ್ಲೆ ಇವರು ನೀಡಿರುವ ಆಹಾರ ಧಾನ್ಯ ಹಾಗೂ ಇತರೆ ಸಾಮಗ್ರಿಗಳ ಸರಬರಾಜು ಆದೇಶಗಳನ್ನು ತಳ್ಳಿಹಾಕಿ (Set aside) ಹೊಸದಾಗಿ ಟೆಂಡರ್ ಕರೆಯಲು ದಿನಾಂಕ 20.10.2020 ರಲ್ಲಿ ಆದೇಶಿಸಿರುತ್ತಾರೆ.<br><br>ಮುಂದುವರೆದು, ಸದರಿ ಟೆಂಡರ್ ದಾರರಿಂದ 2020-21ನೇ ಸಾಲಿಗೆ ಯಾವುದೇ ಆಹಾರ ಸಾಮಗ್ರಿಗಳನ್ನು ಖರೀದಿ ಮಾಡಿರುವುದಿಲ್ಲ. |
| ಆ) | ಈ ಟೆಂಡರ್‌ನಲ್ಲಿ ಎಲ್ 1 ಮತ್ತು ಎಲ್ 2 ಮತ್ತು ಎಲ್ 3 ಬಿಟ್ಟು ನೇರವಾಗಿ ಎಲ್ 5 ಮತ್ತು ಎಲ್ 6 ಗೆ ನವರಿಗೆ ಆಹಾರ ಸಾಮಾಗ್ರಿ ಸರಬರಾಜು ಮಾಡಲು ಆದೇಶ ನೀಡಲು ಅವಕಾಶವಿದೆಯೇ; | ಅವಕಾಶವಿರುವುದಿಲ್ಲ. |

| | | |
|---|---|---|
| ಇ) | ಅವಕಾಶವಿದ್ದಲ್ಲಿ ಯಾವ ನಿಯಮದಡಿ ನೀಡಲಾಗಿದೆ. ಈ ಕ್ರಮದಿಂದ ಸರ್ಕಾರಕ್ಕೆ ಪ್ರತಿ ತಿಂಗಳಿಗೆ ಲಕ್ಷಾಂತರ ರೂ. ಹಾನಿಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಇದು ಕೆ.ಟಿ.ಪಿ.ಪಿ ಕಾಯ್ದೆ ಉಲ್ಲಂಘಿಸಿದಂತಾಗುವುದಿಲ್ಲವೆ; | ಅವಕಾಶವಿರುವುದಿಲ್ಲ. |
| ಈ) | ಈ ಟೆಂಡರ್‌ನಲ್ಲಿ 5 ತಾಲ್ಲೂಕುಗಳಿಗೆ ಈಗಾಗಲೇ ಆದೇಶ ನೀಡಿದ್ದು, ಆ ಟೆಂಡರ್ ದಾರರ ದಾಖಲಾತಿ ಜೊತೆಯಲ್ಲಿ ಎಲ್ 1 ರಿಂದ ಎಲ್ 6 ರವರೆಗೆ ಮಾಹಿತಿ ನೀಡುವುದು? | 2020-21ನೇ ಸಾಲಿಗೆ ಬೀದರ್ ಜಿಲ್ಲೆಯ 5 ತಾಲ್ಲೂಕುಗಳ ವಿದ್ಯಾರ್ಥಿ ನಿಲಯಗಳಿಗೆ ಆಹಾರ ಸಾಮಾಗ್ರಿ ಸರಬರಾಜು ಆದೇಶ ನೀಡಿರುವ ಆದೇಶದ ಪ್ರತಿಗಳನ್ನು ಮತ್ತು ತುಲನಾತ್ಮಕ ದರಪಟ್ಟಿಗಳನ್ನು ಇಲಾಖಾ ಜಾಲತಾಣ https://bcwd.karnataka.gov.in/ ದಲ್ಲಿ ಅಪಲೋಡ್ ಮಾಡಲಾಗಿದೆ. |

**ಸಂಖ್ಯೆ: ಹಿಂವಕ 529 ಬಿಎಂಎಸ್ 2021**

(ಕೋಟ ಶ್ರೀನಿವಾಸ ಪೂಜಾರಿ)
ಸಮಾಜ ಕಲ್ಯಾಣ ಹಾಗೂ ಹಿಂದುಳಿದ
ವರ್ಗಗಳ ಕಲ್ಯಾಣ ಸಚಿವರು